


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 23-03-2021 ಪ್ರಶ್ನೆ ಸಂಖ್ಯೆ : 1648(1896)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 23-03-2021

ಉತ್ತರಿಸುವ ಸಚಿವರು: ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು

ವಿಷಯ : ಪುರಸಭೆ ವ್ಯಾಪ್ತಿಯ ಯುಜಿಡಿ ಕಾಮಗಾರಿ ಕುರಿತು

(ಅ) ರಾಜ್ಯದ ಯಾವ ಯಾವ ಸ್ಥಳೀಯ ಸಂಸ್ಥೆಗಳಲ್ಲಿ ಯುಜಿಡಿ ಕಾಮಗಾರಿಯನ್ನು ಪ್ರಾರಂಭಿಸಲಾಗಿರುತ್ತದೆ; ಅವುಗಳ ಅಂದಾಜು ಮೊತ್ತವೆಷ್ಟು; (ಸ್ಥಳೀಯ ಸಂಸ್ಥೆವಾರು ಮಾಹಿತಿಯನ್ನು ಒದಗಿಸುವುದು)

(ಆ) ಉಡುಪಿ ಜಿಲ್ಲೆಯ ಕುಂದಾಪುರ ಪುರಸಭೆಗೆ ಯುಜಿಡಿ ಕಾಮಗಾರಿಯ ಡಿಪಿಆರ್ ಮತ್ತು ನಕ್ಷೆಯನ್ನು ತಯಾರಿಸಲಾಗಿದೆಯೇ; (ಪ್ರತಿಯನ್ನು ಒದಗಿಸುವುದು ) ಈ ಯೋಜನೆಯ ಅಂದಾಜು ವೆಚ್ಚವೆಷ್ಟು; ಬಿಡುಗಡೆಯಾದ ಅನುದಾನವೆಷ್ಟು; ಬಿಡುಗಡೆಗೆ ಬಾಕಿಯಿರುವ ಅನುದಾನವೆಷ್ಟು; ಮೂಲ ಯೋಜನೆಗೆ ತಿದ್ದುಪಡಿಯನ್ನು ಮಾಡಲಾಗಿದೆಯೇ; ಹೌದಾದಲ್ಲಿ, ಯಾವ ಕಾರಣಕ್ಕೆ ತಿದ್ದುಪಡಿ ತರಲಾಗಿದೆ; (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು )

(ಇ) ಈ ಯುಜಿಡಿ ಕಾಮಗಾರಿಯ ಟೆಂಡರ್ ಅವಧಿ ಯಾವುದು; ಟೆಂಡರ್ ಪಡೆದ ಗುತ್ತಿಗೆದಾರರ ಹೆಸರು ಮತ್ತು ವಿಳಾಸ ಯಾವುದು; ಕಾಮಗಾರಿಯನ್ನು ಯಾವಾಗ ಮುಕ್ತಾಯಗೊಳಿಸಲಾಗುವುದು;

(ಈ) ಈ ಕಾಮಗಾರಿಗಾಗಿ ಕಾಂಕ್ರೀಟ್ ರಸ್ತೆಗಳ ಮಧ್ಯಭಾಗವನ್ನು ಕತ್ತರಿಸಿ ಕಾಮಗಾರಿ ನಿರ್ವಹಿಸುತ್ತಿದ್ದು, ನಂತರ ಅವುಗಳನ್ನು ಮರು ಕಾಂಕ್ರೀಟ್ ಮಾಡದೇ ಇರುವುದರಿಂದ ಜನಸಾಮಾನ್ಯರಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾಧ್ಯಮದಲ್ಲಿ ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಕಾಮಗಾರಿಯನ್ನು ಶೀಘ್ರವಾಗಿ ಮುಕ್ತಾಯಗೊಳಿಸುವ ಬಗ್ಗೆ ಕ್ರಮವೇನು?